27

# ಹಾಸವಿಲಾಸ

(ಆರಿಸಿ ತೆಗೆದ ನಗೆಹನಿಗಳು)

★

ರಸಿಕತ್ವ, ರಂಜನ, ಚಾತುರ್ಯ ಮತ್ತು
ಸ್ವಾರಸ್ಯದ ಉತ್ತರ-ಪ್ರತ್ಯುತ್ತರಗಳ ಸಂಗ್ರಹ.

ಮಂಗಳೂರು.

1955.

ANNA 1

ಒಂದಾಣೆ ಮಾಲೆ

# ಒಂದಾಣೆ ಮಾಲೆ ಎಲ್ಲರಿಗಾಗಿ ಇದೆ

## ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟೆರಾಯ (ವಿನೋದ ಕಥೆ) ಲೇ: ದಿ। ಎಮ್.ಎನ್.ಕಾಮತ್
೨. ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು
೪. ಸದ್ರಿಸುಬ್ಬ (ಏಕಾಂಕ ಪ್ರಹಸನ) ಲೇ: ದಿ। ಎಮ್.ಎನ್. ಕಾಮತ್
೫. ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ಎಮ್. ಆರ್. ಭಟ್)
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. 'ಬೀಡಿಸೇದಬೇಡಿ' ಮತ್ತು 'ಆ ಮಂಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ)
೯. *ಲಂಚಕ್ಕೆ ಸಂಚಕಾರ (ಡಾ। ಎಸ್. ಪಿ. ಭಟ್.)
೧೦. ಟಿಶ್ಯೂ ಔಷಧಿಗಳ ಕೈಪಿಡಿ
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿತೀಯ ಮುದ್ರಣ)
೧೨. ಜೀವದ ಮೌಲ್ಯ (ಎಲ್. ಎಸ್. ನಾಯಕ.)
೧೩. ಸತ್ತವನ ಸೇಡು (ಡಾ। ವಿ. ಆರ್. ಭಟ್.)
೧೪. "ವೆಂಕಟನ ಸಂಕಟ"(ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ ೧೭. ಒಗಟುಗಳು (ಟಿ. ಚಂದ್ರರಾಜ ಸೆಟ್ಟಿ)
೧೮. ಜಗಳಗಂಟಿ ಮತ್ತು ಇತರ ಕಥೆಗಳು ೧೯. ರಥೋತ್ಸವ
೨೦. ಕೆರೀನಾಯಿ ಮತ್ತು ಮುಪ್ಪು. (ಲೇ: ದಿ। ಎಂ. ಎನ್. ಕಾಮತ್)
೨೧. ಭಾರತದ ಮಹಾನಗರಗಳು. (ಪ್ರಥಮ ಭಾಗ)
೨೨. ತಿರುಕ್ಕುರಲ್ (ಶ್ರೀ। ಡಿ. ಪುಟ್ಟಸ್ವಾಮಿ)
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು
೨೪. ಭಾರತದ ಮಹಾನಗರಗಳು (ದ್ವಿತೀಯ ಭಾಗ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ಆರಿಸಿ ತೆಗೆದ ನಗೆಹನಿಗಳು)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಇಪ್ಪತ್ತೇಳು ಪುಸ್ತಕಗಳಲ್ಲಿ, ಒಟ್ಟು ಇಪ್ಪತ್ತೇಳು ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ 604 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1

**ಎಲ್ಲರಿಗೆ ಬೇಕಾದುದು ಒಂದಾಣೆ ಮಾಲೆಯಲ್ಲಿದೆ.**

# ಹಾಸವಿಲಾಸ

ಉಪಾಧ್ಯಾಯ: ಸುಧೀರ್, ನಿನ್ನ ತಂದೆಯು ತಿಂಗಳಿಗೆ ಇನ್ನೂರು ರೂಪಾಯಿಯಂತೆ ಹಣ ಉಳಿಸುವುದಾದರೆ, ಒಂದು ವರ್ಷದಲ್ಲಿ ಅವನೊಡನೆ ಏನಿರುವುದು?

ಸುಧೀರ್: ಒಂದು ರೇಡಿಯೋ, ಒಂದು ಹೊಸ ಸೂಟ್ ಮತ್ತು ಅಮ್ಮನಿಗೆ ಹತ್ತಿಪ್ಪತ್ತು ಸೀರೆಗಳು.

---

ಡಾಕ್ಟರ್: ನಿಮ್ಮ ಗಂಡನಿಗೆ ಯಾವ ಪೀಡೆಯೆಂದು ಹೇಳಲಾರಿರಾ?

ಹೆಂಡತಿ: ಪ್ರಾಯಶಃ ಅವರಿಗೆ ಹಣದ ಕುರಿತು ಯೋಚನೆಯೆಂದು ತೋರುತ್ತದೆ.

ಡಾಕ್ಟರ್: ನೀವು ನಿಶ್ಚಿಂತರಾಗಿರಿ! ಆ ಯೋಚನೆಯಿಂದ ಅವರನ್ನು ಪಾರುಮಾಡಬಲ್ಲೆ.

---

ವಕೀಲ: ಹೊಂ! ಹಾಗಾದರೆ ನಿಮ್ಮ ಪರವಾಗಿ ಕೋರ್ಟಿನಲ್ಲಿ ವಾದಿಸಬೇಕೆಂದು ನೀವು ಹೇಳುವುದೇ? ನಿಮ್ಮಲ್ಲಿ ಎಷ್ಟು ಹಣವಿದೆ?

ಕಕ್ಷಿಗಾರ: ನನ್ನೊಡನೆ ಹಣವಿಲ್ಲ. ಒಂದು ಮೋಟಾರ್ ಸೈಕಲ್ ಮಾತ್ರ ಇದೆ.

ವಕೀಲ: ಪರವಾ ಇಲ್ಲ. ಅದನ್ನು ಮಾರಿ ಹಣ ಪಡೆಯಬಹುದು. ಇರಲಿ. ಈಗ, ಯಾವುದನ್ನು ಕದ್ದ ಬಗ್ಗೆ ನಿಮ್ಮ ಮೇಲೆ ಆರೋಪ ಹೊರಿಸಿದ್ದಾರೆ?

ಕಕ್ಷಿಗಾರ: ಮೋಟಾರ್ ಸೈಕಲ್.

---

ಹೆಂಡತಿ: ನೋಡಿ, ನೀವು ಉಪದೇಶಿಸುವಂತೆ ಮಿತವ್ಯಯ ಸಾಧಿಸಿದ್ದೇನೆ, ಈ ತಿಂಗಳಲ್ಲಿ.

ಗಂಡ: ಎಷ್ಟು ಉಳಿಸಿದೆ?

ಹೆಂಡತಿ: ನೀವು ಕೊಟ್ಟ ಇನ್ನೂರು ರೂಪಾಯಿಗಳನ್ನು ಬೇಂಕಿನಲ್ಲಿ ಹಾಕಿಬಿಟ್ಟೆ.

ಗಂಡ: ಚಿಂತೆಯಿಲ್ಲ.

ಹೆಂಡತಿ: ಇಲ್ಲ. ಈ ತಿಂಗಳಲ್ಲಿ ವಸ್ತ್ರದ ಅಂಗಡಿಯಿಂದ, ಹಾಲಿನವನಿಂದ, ಅಗಸನಿಂದ, ದವಸ ಧಾನ್ಯಗಳ ಅಂಗಡಿಯವನಿಂದ—ಬಂದ 'ಬಿಲ್'ಗಳನ್ನೆಲ್ಲಾ ಹರಿದು ಬಿಸಾಡಿದೆ!

---

ಗೃಹಿಣಿ: (ಕುಂಟ ಭಿಕಾರಿಗೆ ಭಿಕ್ಷೆ ಕೊಡುತ್ತಾ) ಇಗೋ, ಈ ಆಣೆ ತಕ್ಕೊಳ್ಳು. ಕುಂಟನಾಗಿರುವುದು ಕೆಟ್ಟದು. ಆದರೆ, ಕುರುಡನಾಗಿದ್ದರೆ, ನಿನ್ನ ಪಾಡು ಇನ್ನೂ ಶೋಚನೀಯವಾಗುತ್ತಿತ್ತು.

ಭಿಕ್ಷುಕ: ನೀವನ್ನುವುದು ಅಕ್ಷರಶಃ ನಿಜ ಅಮ್ಮಾ! ನಾನು ಕುರುಡನಾಗಿದ್ದಾಗ, ನನಗೆ ಖೋಟಾ ನಾಣ್ಯಗಳೇ ಹೆಚ್ಚಾಗಿ ಬರುತಿದ್ದುವು.

---

"ಢಿಲ್ಲಿಯಲ್ಲೊಬ್ಬನು ತನ್ನ ನಾಲ್ಕನೇ ಹೆಂಡತಿಯನ್ನು ಸ್ಮಶಾನಕ್ಕೆ ತಲಪಿಸಿ ಬಂದನಂತೆ."

"ಲೋಕದಲ್ಲಿ ಹಾಗೇ—ಕೆಲವರಿಗೆ ಹೆಂಡತಿ ಸಿಕ್ಕುವುದೇ ಕಷ್ಟ. ಕೆಲವರಿಗೆ ಸುಡಲು ಬೇಕಾದಷ್ಟು ಹೆಂಡಿರು ದೊರೆಯುತ್ತಾರೆ!"

---

ಯಜಮಾನಿ: (ಸೇವಕಿಗೆ) "ಅಕೋ, ಅಲ್ಲಿ ಜೇಡರ ಬಲೆಯೊಂದು ಕಾಣುತ್ತಿದೆ. ಏತರಿಂದ?"

ಸೇವಕಿ: "ಜೇಡರ ಹುಳದಿಂದ."

---

"ನನಗೆ ಬೆಂಗಳೂರೆಂದರೆ ಬಹಳ ಪ್ರೀತಿ. ಆ ಊರು ನನಗೆ ಕೆಲವು ಶಾಂತಿಯ, ಸಂತೋಷದ ದಿನಗಳನ್ನು ಕೊಟ್ಟಿದೆ."

"ಏಕೆ, ನೀನು ಈ ವರೆಗೆ ಬೆಂಗಳೂರಿಗೆ ಹೋಗಿಲ್ಲವಲ್ಲಾ!"

"ನಿಜ. ನನ್ನ ಹೆಂಡತಿ ಶಾಂತಿ, ಒಂದು ತಿಂಗಳು ಅಲ್ಲಿಗೆ ಹೋಗಿದ್ದಳು."

---

ಹೊಸ ಕಂಪೆನಿ ಸ್ಥಾಪಕನು, ಪತ್ರಿಕಾ ಆಫೀಸಿಗೆ ಓಡಿ ಬಂದು, ಪತ್ರಿಕಾ ಮೆನೇಜರನೊಡನೆ ಒದರಿದನು: "ಏನಯ್ಯಾ ಇದು? 'ಹಳೇಬೀಡು

ಕಲ್ಲಪ್ಪ' ಎಂಬುದರ ಬದಲಿಗೆ 'ಹಾಳೆ ಬೀದಿ ಕಳ್ಳಪ್ಪ' ಎಂದು ಅಚ್ಚು ಮಾಡಿ ರುವಿರಿ? ಪರಿಹಾರವೇನು?"

ಪತ್ರಿಕಾ ಮೆನೇಜರನು ತಣ್ಣಗೆ ಉತ್ತರವಿತ್ತನು: "ಮುದ್ರಣದೋಷ. ನಾಳೆ ಸರಿಪಡಿಸೋಣ!" ಮರುದಿನ ಹೀಗೆ ಅಚ್ಚಾಗಿತ್ತು: "ಹಳೆ ಬೀಡಾ ಕಲ್ಲಮ್ಮ."

---

ಅಪಘಡಕ್ಕಿಡಾದ ಡ್ರೈವರ್: (ಎಚ್ಚರವಾಗಿ) "ಎಲ್ಲಿದ್ದೇನೆ ನಾನು?"

"ನಂಬ್ರ ೧೨೧."

"ಆಸ್ಪತ್ರೆಯೋ ಜೈಲೋ?"

---

ವಸ್ತ್ರ ಮಡಿಮಾಡುವ ಅಂಗಡಿಯವರು, ವ್ಯಾಪಾರಕ್ಕಾಗಿ ಹೊಸತರದ ಜಾಹೀರಾತನ್ನು ಹೀಗೆ ಬರೆದಿದ್ದರು: "ನೀವು ನಿಮ್ಮ ಹೆಂಡತಿಯನ್ನು ಸುಮ್ಮನೆ ಏಕೆ ಕೊಲ್ಲುತ್ತೀರಿ? ನಿಮಗಾಗಿ ಆ ಕೆಲಸವನ್ನು ನಾವೇ ಮಾಡುತ್ತೇವೆ."

---

ಡಾಕ್ಟರರು ಅವಸರದಿಂದ ಹೊರಟ್ಟಿದ್ದರು. ಅವರ ಹೆಂಡತಿ ಕೇಳಿ ದಳು: "ಎಲ್ಲಿಗೆ? ವಿಶೇಷ ಕಾಯಿಲೆಯೇ?"

ಡಾಕ್ಟರ್: "ಕಾಯಿಲೆ ವಿಶೇಷವಲ್ಲ. ಆದರೆ ಮಗುವಿನ ತಾಯಿ ಯೊಡನೆ "ಡಾಕ್ಟರರು ಬರುವುದಕ್ಕೆ ಮೊದಲು ಏನು ಮಾಡಬೇಕು?" ಎಂಬ ಪುಸ್ತಕವಿದೆ. ಆಕೆ ಆ ಪುಸ್ತಕವನ್ನು ಓದುವ ಮೊದಲೇ ನಾನಲ್ಲಿಗೆ ತಲಪ ಬೇಕು."

---

ಉಪಾಧ್ಯಾಯ: ರಾಮೂ, ಇದ್ದಲು ಮಣಕ್ಕೆ ಒಂದು ರೂಪಾಯಿ ಪ್ರಕಾರ ಮಾರಾಟವಾಗಿ ಹೋಗುತ್ತದೆ. ನಿನ್ನ ವ್ಯಾಪಾರಿಗೆ ನೀನು ಆರು ರೂಪಾಯಿ ಕೊಟ್ಟರೆ ಎಷ್ಟು ಇದ್ದಲು ಪಡೆಯಬಹುದು?

ರಾಮು: ಐದೂವರೆ ಮಣ.

ಉಪಾಧ್ಯಾಯ: ತಪ್ಪಲ್ಲವೇ ರಾಮು?

ರಾಮು: ನನಗೆ ಗೊತ್ತು ಟೀಚರ್! ಆದರೆ, ಕೊಂಡುಕೊಳ್ಳಲು ಹೋದಾಗ ಹಾಗೆ ಮಾಡುವರಲ್ಲಾ!

---

ವಕೀಲ: ಲೆಕ್ಕವನ್ನು ಪ್ರತಿವಾದಿಗೆ ತೋರಿಸಿದಿರಾ?
ಕಕ್ಷಿಗಾರ: ತೋರಿಸಿದೆ.
ವಕೀಲ: ಅವನು ಏನು ಹೇಳಿದನು?
ಕಕ್ಷಿಗಾರ: 'ನರಕಕ್ಕೆ ಹೋಗು' ಎಂದು ಶಪಿಸಿದನು.
ವಕೀಲ: ಆಗ ನೀನೇನು ಮಾಡಿದೆ?
ಕಕ್ಷಿಗಾರ: ನೆಟ್ಟಗೆ ನಿಮ್ಮಲ್ಲಿಗೆ ಬಂದೆ.

---

ನ್ಯಾಯಾಧೀಶ: ಕೈದಿಯೇ, ನಿನ್ನಲ್ಲಿ ವಿಶ್ವಾಸವಿಟ್ಟವರನ್ನು ನೀನು ಸುಲಿಯುವುದೆಂದರೆ ಎಂತಹ ಅನ್ಯಾಯವಿದು!

ಕೈದಿ: ಹಾಗೆಂದು, ನನ್ನಲ್ಲಿ ವಿಶ್ವಾಸವಿಡದವರನ್ನು ಸುಲಿದರೆ ಅದು ನ್ಯಾಯವಾಗುವುದೇ ಸ್ವಾಮಿ?

---

ಮನೆ ಯಜಮಾನ: ಏನಯ್ಯ ನಿನ್ನ ಲೆಕ್ಕ? ಬಿಸಾಡಿ ಹಾಕಿದ ನನ್ನ ಶರ್ಟಿಗೂ ಚಾರ್ಜ್ ಹಾಕಿರುವೆಯಲ್ಲಾ!

ಧೋಬಿ: ತಪ್ಪೇನು ಸ್ವಾಮಿ? ಅದನ್ನು ಕಳಕೊಳ್ಳುವ ಮೊದಲು ಅದಕ್ಕೆ ಮಡಿಯಾಗಿತ್ತು.

---

ತಾಯಿ: "ಏನು ರಾಮೂ, ನೀನು ಗಿಳಿಗೆ ಕೆಟ್ಟ ನುಡಿ ಕಲಿಸುತ್ತೀಯಾ?"

ರಾಮು: "ಇಲ್ಲಮ್ಮಾ, ಅದು ಏನು ಹೇಳಬಾರದೆಂಬುದನ್ನು ಕಲಿಸುತ್ತಿದ್ದೇನೆ."

---

ಡಾಕ್ಟರ್: "ನಿಮ್ಮ ಗಂಡನಿಗೆ ಪೂರ್ಣ ವಿಶ್ರಾಂತಿ ಮತ್ತು ಶಾಂತಿ ಬೇಕು. ತಕ್ಕೊಳ್ಳಿ ನಿದ್ರೆ ಹತ್ತುವ ಕೆಲವು ಮಾತ್ರೆಗಳು ಇಲ್ಲಿವೆ!"

ರೋಗಿಯ ಹೆಂಡತಿ: ಇವುಗಳನ್ನು ಅವರಿಗೆ ಯಾವಾಗ ಕೊಡಬೇಕು?"

ಡಾಕ್ಟರ್: "ಅವು ಅವರಿಗಲ್ಲ, ನಿಮಗೆ!"

---

ಮನೆ ಯಜಮಾನಿ: "ಏ, ಮಿಸ್ರೀ, ನಿನ್ನ ಹೆಸರು ತಮಾಷೆಯಾಗಿ ಕೇಳಿಸುತ್ತದೆ. ಯಾರಾದರೂ ಅತಿಥಿಗಳು ಬಂದರೆ ಅವರೆದುರಿಗೆ ನಿನ್ನನ್ನು ನಾನು ಕೇಸರಿ ಎಂದು ಕರೆಯುತ್ತೇನೆ. ತಿಳಿಯಿತೇ?"

ಮಿಸ್ಸಿ: "ಆಗ ನಾನು ನಿಮ್ಮನ್ನು ಹೇಗೆ ಕರೆಯಬೇಕು?"
ಯಜಮಾನಿ: "ಹುಚ್ಚಿ!"
ಮಿಸ್ಸಿ: "ಆಗಬಹುದಮ್ಮ."

---

ದಂತ ವೈದ್ಯರಲ್ಲಿ, ಹಲ್ಲು ತೆಗೆಸಲು ಬಂದಾತನೊಬ್ಬನು, ತನ್ನ ಕಿಸೆಗೆ ಕೈ ತುರುಕಿದನು. ದಂತ ವೈದ್ಯನು ಹೇಳಿದನು: "ಮೊದಲೇ ಹಣ ಕೊಡಬೇಕಾಗಿಲ್ಲ."

ಬಂದಾತ: "ಅಲ್ಲ, ಇಂಜೆಕ್ಷನ್ ಕೊಡುವ ಮೊದಲು ನಾನು ಹಣ ಲೆಕ್ಕ ಮಾಡುತಿದ್ದೇನೆ. ಹಲ್ಲೆಳೆಯುವಾಗ ಫಕ್ಕನೆ ಎಚ್ಚರ ತಪ್ಪಿದರೆ!"

---

"ಅಹುದು, ನನ್ನ ಗಂಡ ಪ್ರತಿ ರವಿವಾರ ನನ್ನನ್ನು ವಸ್ತುಪ್ರದರ್ಶನಾಲಯಕ್ಕೆ ಕರೆದೊಯ್ಯುತ್ತಾರೆ."

"ಅಹುದೇ? ಅವನು ಏನು ಕಲಿತಿದ್ದಾನೆ?"

"ಮಿತವ್ಯಯ."

---

ರಾಮು: "ಕಿಟ್ಟು, ಆ ಸುಬ್ಬನ ವಿಷಯ ನಿನ್ನ ಅಭಿಪ್ರಾಯವೇನು? ಒಳ್ಳೆ ಪ್ರಾಮಾಣಿಕನೇ?"

ಕಿಟ್ಟು: "ಪ್ರಾಮಾಣಿಕನೇ? ಏನೋ! ನಾನು ಅವನಿಗೆ ಹಸ್ತಲಾಘವವಿತ್ತ ನಂತರ ನನ್ನ ಬೆರಳುಗಳನ್ನು ಲೆಕ್ಕ ಮಾಡುತ್ತಿದ್ದೇನೆ."

---

ಲಾಯರ್: ನಾನು ಸಣ್ಣವನಿರುವಾಗ, ದೊಡ್ಡ ದರೋಡೆಖೋರನಾಗಬೇಕೆಂದು ನನ್ನ ಮಹತ್ವಾಕಾಂಕ್ಷೆಯಿತ್ತು!

ಕಕ್ಷಿಗಾರ: ಅದೃಷ್ಟವಂತರು! ಬಾಲ್ಯದ ಸವಿಗನಸು, ದೊಡ್ಡವರಾದ ಮೇಲೆ ನಿಜವಾಗುವುದು ಕೆಲವೇ ಮಂದಿಗೆ ಮಾತ್ರ.

---

"ನಿನ್ನನ್ನು ನೋಡುವಾಗ ನನಗೆ ಯಾವಾಗಲೂ ಆ ಕಿಟ್ಟನ ನೆನಪಾಗುತ್ತದೆ."

"ಆದರೆ ನಾನು ಅವನಂತೆ ಕಾಣುವುದಿಲ್ಲ!"

"ಇದ್ದಿಯಪ್ಪ, ನಿನ್ನ ಹಾಗೆ ಅವನೂ ನನ್ನೊಡನೆ ನೂರು ರೂಪಾಯಿ ಸಾಲ ಪಡಕೊಂಡಿದ್ದಾನೆ."

---

"ಏನಂದಿ, ನಿನ್ನ ಹೆಂಡತಿಗೆ ಇಸ್ಪಿಟ್ ಕಲಿಸಿದ್ದಿಯಾ?"
"ಹೌದು, ನಿನ್ನೆ ರಾತ್ರಿ ನನ್ನ ಸಂಬಳದ ಕಾಲು ವಾಸಿ ಗೆದ್ದೆ."

---

"ನಿನ್ನ ಕೆಲಸ ಹೇಗೆ ಹೋಯಿತು?"
"ಅಸ್ವಸ್ಥದಿಂದ"
"ಎಂಥ ಅಸ್ವಸ್ಥ?"
"ನನ್ನನ್ನು ಕಂಡರೆ ತಲೆಸಿಡಿತ ಉಂಟಾಗುತ್ತದೆಂದು ನನ್ನ ಯಜಮಾನರು ಹೇಳತೊಡಗಿದ್ದರು."

---

"ನಾನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಚಹಾ ಕುಡಿಯುತ್ತೇನೆ."
"ಯಾವುದನ್ನು ವಿಶೇಷ ಸಂದರ್ಭವೆನ್ನುತ್ತಿ?"
"ಚಹಾ ಕುಡಿಯುವುದನ್ನು."

---

ಗುಣ ಹೊಂದಿದ ರೋಗಿ: "ನಿಮ್ಮ ಋಣವನ್ನು ನಾನು ಹೇಗೆ ತೀರಿಸಲಿ?"
ಡಾಕ್ಟರ್: "ಚೆಕ್ ಅಥವಾ ನಗದಿ ತೆತ್ತು."

---

"ತೊಂದರೆ ಕೊಡಬೇಡ. ಅವರಿಗೆ (ಯಜಮಾನರಿಗೆ) ಕಾಗದ ಬರೆಯುತಿದ್ದೇನೆ."
"ಅಷ್ಟು ಮೆಲ್ಲಗೆ ಏಕೆ ಬರೆಯುತ್ತಿ?"
"ಅವರು ವೇಗವಾಗಿ ಓದಲಾರರು."

---

ಕಂಪಿತ ಪತಿ: "ನೀನು ನನ್ನನ್ನು ಲಗ್ನವಾಗುವಾಗ ನಿನ್ನ ಮೈ ಮೇಲೆ ಒಂದು ಹರಕು ಚಿಂದಿಯಾದರೂ ಇರಲಿಲ್ಲ!"
ಕುಪಿತ ಪತ್ನಿ: "ನಿಜ; ಈಗ ಅದೇ ಧಾರಾಳವಾಗಿದೆ."

---

ಉಪಾಧ್ಯಾಯ: "ಈಗ ನಾನು ೨೭ರಿಂದ ೨೫ ಕಳೆದರೆ ವ್ಯತ್ಯಾಸ ವೇನು?"
ಚಿಕ್ಕ ರಾಮು: "ನಾನೂ ಹೇಳುವುದು ಅದೇ—ಅದಕ್ಕೆಲ್ಲಾ ಯಾರು ಗಣ್ಯ ಮಾಡುತ್ತಾರೆ?"

---

"ಎಲ್ಲಿಗೆ ಹೋಗಿದ್ದಿರಿ?"

"ರೈಲ್ವೇಸ್ಟೇಷನಿಗೆ; ನನ್ನ ಹೆಂಡತಿಯನ್ನು ತವರು ಮನೆಗೆ ಕಳಿಸಲು."

"ಆದರೆ ನಿಮ್ಮ ಕೈಗೆ ಮಸಿತಾಗಿದೆ!"

"ಅಹುದು, ರೈಲ್ವೇ ಇಂಜೀನನ್ನು ಪ್ರೇಮದಿಂದ ತಟ್ಟುತ್ತಿದ್ದೆ."

---

"ಎಲ್ಲಿಗೆ ಹೋದರು ಶಂಕರರಾಯರು?"

"ಮನೆಗೆ— ಅವರ ಮಗು ಮಲಗಿದೆ ಎಂದು ಹೆಂಡತಿಯಿಂದ ಈಗ ತಾನೆ ಫೋನ್ ಬಂತು. ಮಲಗಿದಾಗ ಮಗು ಹೇಗೆ ಕಾಣುತ್ತಿದೆ ನೋಡೋಣ ಎಂದು ಧಾವಿಸಿದರು."

---

"ಅಪ್ಪಾ, ನಿನಗಾಗಿ ಒಂದು ರೂಪಾಯಿ ಉಳಿಸಿದ್ದೇನೆ."

"ಹೇಗೆ ಮಗು?"

"ನನ್ನ ಕ್ಲಾಸಿನಲ್ಲಿ ನಾನು ಕೊನೆಯ ಸ್ಥಾನದಿಂದ ಸ್ವಲ್ಪ ಮೇಲಕ್ಕೆ ಬಂದರೆ ನನಗೊಂದು ರೂಪಾಯಿ ಕೊಡುತ್ತೀ ಅಂದಿಯಲ್ಲ. ನಾನು ಇನ್ನೂ ಆ ಸ್ಥಾನದಿಂದ ಕದಲಲಿಲ್ಲ!"

---

ಮರವೆಯ ಸ್ವಭಾವದವನೊಬ್ಬನು ಪರಿಚಿತ ಡಾಕ್ಟರರಲ್ಲಿಗೆ ಹೋಗಿ, ಒಂದು ತಾಸು ಮಾತಾಡಿ ಕುಳಿತನು. ಹೊರಡುವಾಗ ಡಾಕ್ಟರರು ಅಂದರು: "ಹೋಗುತ್ತೀರಾ? ಒಳ್ಳೇದು, ಯಾವಾಗಲೂ ಇತ್ತ ಬರುತ್ತಾ ಇರಬೇಕು. ................ಮನೆಯಲ್ಲಿ ಸೌಖ್ಯವೇ?"

ಮನುಷ್ಯನ ಮೋರೆ ಕೂಡಲೆ ಪೆಚ್ಚು ಬಿತ್ತು. ಗಾಬರಿಯಿಂದ ಹೇಳಿದನು: "ಅಯ್ಯೋ, ಡಾಕ್ಟರರೇ, ಮರೆತೇ ಹೋಗಿದ್ದೆ, ನನ್ನ ಹೆಂಡತಿಯು ಮೂರ್ಛೆ ಬಿದ್ದಿದ್ದಾಳೆಂದು ನಿಮ್ಮನ್ನು ಕರೆಯಲು ಬಂದಿದ್ದೆ."

---

"ಅಮ್ಮಾ, ಹೊರಗೆ ಒಂದು ನಾಯಿ ನಿಂತಿದೆ, ನಮ್ಮ ಮೋಟು ಮಾವನ ಹಾಗೇ ಕಾಣುತ್ತಿದೆ."

"ಛೀ, ಹಾಗನ್ನಬಾರದು ಮಗೂ!"

"ಏಕಮ್ಮ, ನಾಯಿಗೆ ಅದು ತಿಳಿಯುತ್ತದೆಯೇ?"

---

ಕೈಯಲ್ಲಿ ಒಂದು ಸುತ್ತಿಗೆಯನ್ನು ಹಿಡಕೊಂಡು, ಒಬ್ಬನು ಪೋಲಿಸ್ ಸ್ಟೇಷನಿಗೆ ಓಡಿಬಂದು ಪೋಲಿಸನೊಡನೆ ಅವಸರದಲ್ಲಿ ಒದರಿದನು: "ಏ, ಪೋಲೀಸ್, ನನ್ನನ್ನು ಬೇಗ ಜೈಲಿನಲ್ಲಿ ಹಾಕಿ, ಬೇಗ ಹಾಕಿಬಿಡು. ನಾನು ನನ್ನ ಹೆಂಡತಿಯ ತಲೆಗೆ ಈ ಸುತ್ತಿಗೆಯಿಂದ ಹೊಡೆದು ಬಂದಿರುತ್ತೇನೆ."

ಪೋಲೀಸ್: "ಕೊಂದುಬಿಟ್ಟೆಯಾ?"

ಬಂದವನು: "ಇಲ್ಲ, ಅವಳು ಚೇತರಿಸಿಕೊಳ್ಳುತ್ತಿದ್ದಾಳೆ. ಅಷ್ಟರೊಳಗೆ ಬೇಗ ಹಾಕಿಬಿಡು. ನಿನ್ನ ದಮ್ಮಯ್ಯ!"

---

ಗಂಡ: "ಆ ನಾಯಿಗೆ ವೃಥಾ ಪೀಡೆ ಕೊಡಬೇಡ. ಅದು ನಿನಗೆ ವಿಧೇಯವಾಗಿ ನಡಕೊಳ್ಳುವಂತೆ ಮಾಡುವುದು ಅಸಾಧ್ಯ!"

ಹೆಂಡತಿ: "ಏಕನ್ನುತ್ತೀರಿ? ಸ್ಥೈರಣೆ ಇದ್ದರೆ ಎಲ್ಲವೂ ಸಾಧ್ಯ. ಮೊದಮೊದಲು ನಿಮ್ಮನ್ನು ವಿಧೇಯರನ್ನಾಗಿ ಮಾಡಲಿಕ್ಕೆ ನನಗೆಷ್ಟು ತೊಂದರೆಯಾಯಿತು."

---

ಸೇವಕ: (ಕ್ಲಬ್ಬಿಗೆ ಓಡಿಬಂದು) "ಸ್ವಾಮಿ, ಮನೆಗೆ ಬೆಂಕಿಹತ್ತಿದೆ!"

ಯಜಮಾನ: ಯಜಮಾನಿಗೆ ತಿಳಿಸು. ನಾನು ಮನೆ ವಿಚಾರಗಳಲ್ಲಿ ತಲೆ ಹಾಕೋದೇ ಇಲ್ಲ.

---

ಭಾವೀ ಮಾವ: "ನೀನು ಇಬ್ಬರ ಪೋಷಣೆ ನೋಡಬೇಕಾಗುತ್ತದೆ"

ಭಾವೀ ಅಳಿಯ: "ಆದರೆ, ನನಗೊಬ್ಬಳೇ ಸಾಕು!!"

---

"ನಾನು ರಾತ್ರೆ ಮನೆ ಸೇರುವಾಗ ಐದು ನಿಮಿಷ ತಡವಾದರೆ ಸಾಕು, ನನ್ನ ಹೆಂಡತಿ ನಾಟಕದ ಒಂದಂಕವನ್ನೇ ಹೊಡುತ್ತಾಳೆ!"

"ನಿನ್ನ ಸುದೈವ, ನನ್ನವಳಾದರೆ ಇಡೀ ನಾಟಕವನ್ನೇ ಆಡುತ್ತಾಳೆ."

---

ಬಂದವ: "ಅಮ್ಮಾ, ನಾನು ಇಲೆಕ್ಟ್ರಿಕ್ ಕಂಪೆನಿಯವನು! ಈ ಮನೆಯಲ್ಲಿ ಕೆಲಸಮಾಡದ ಯಾವುದೋ ಒಂದು ಇದೆಯಂತಲ್ಲ!"

ಯಜಮಾನಿ: "ಹೌದು, ಅವರು ಮಹಡಿಯ ಮೇಲಿದ್ದಾರೆ."

---

ಕೋರ್ಟಿನಲ್ಲಿ ನ್ಯಾಯಾಧೀಶ: "ನಿನ್ನ ಗಂಡನ ಕಡೆಗೆ, ಉರಿವ ಕೆಂಡದಂತಹ ಸೌಟನ್ನು ಏಕೆ ಒಗೆದೆ?"

ಗೃಹಿಣಿ: "ಕಬ್ಬಿಣ ಬಿಸಿಯಾಗಿರುವಾಗಲೇ ಹೊಡೀ ಎನ್ನುತ್ತಾರೆ. ನನ್ನ ತತ್ತ್ವವೂ ಅದೇ."

---

ಚುರುಕು ಹುಡುಗ: (ಗರ್ವದಿಂದ) "ನನ್ನ ತಂದೆ ಪ್ರಖ್ಯಾತ ಡಾಕ್ಟರ್. ನಿನ್ನ ತಂದೆ?"

ಎರಡನೇ ಹುಡುಗ: "ನಿನ್ನ ತಂದೆ ಮಾಡಿದ ತಪ್ಪುಗಳನ್ನೆಲ್ಲ ನನ್ನ ತಂದೆ ಸುಧಾರಿಸುತ್ತಾನೆ. ಅವನಿಗೆ ಹೆಣಹೊರುವ ಕೆಲಸ."

---

"ನಿನ್ನ ಗಂಡ ಕಿವುಡನೇ?"

"ಕಿವುಡ? ನೋಡಿ, ನಾವು ಒಮ್ಮೆ ಒಂದು ಸಿಡಿಮದ್ದಿನ ಕಾರ್ಖಾನೆ ಸಮೀಪ ವಾಸವಾಗಿದ್ದೆವು. ಒಂದು ರಾತ್ರಿ ಆ ಕಾರ್ಖಾನೆಯಲ್ಲಿ ಭಯಂಕರ ಸ್ಫೋಟವಾಯಿತು. ಆಗ ನಮ್ಮವರು ಎದ್ದು, ನನ್ನ ಕಡೆಗೆ ತಿರುಗಿ, 'ನೀನು ನಿನ್ನ ಕೆಮ್ಮಿಗೆ ನಾಳೆ ಏನಾದರೂ ಔಷಧ ಮಾಡಿಸಲೇಬೇಕು" ಅಂದರು.

---

"ಈ ತಿಂಗಳಲ್ಲಿ ನನ್ನ ಬಾಡಿಗೆ ಕೊಡಲಾರೆ."

"ಆದರೆ, ನೀವು ಕಳೆದ ಎರಡು ತಿಂಗಳಲ್ಲೂ ಹಾಗೇ ಹೇಳಿರುವಿರಿ!"

"ನಿಜ, ನನ್ನ ಮಾತಿನಂತೇ ನಡೆಕೊಂಡಿರುವೆನಲ್ಲವೇ?"

---

ಉಪಾಧ್ಯಾಯ: "ತನ್ನ ತಂದೆಯನ್ನೂ ತಾಯಿಯನ್ನೂ ಕೊಂದ ಮಗನನ್ನು ಏನೆಂದು ಕರೆವಿರಿ?"

ಒಬ್ಬ ಹುಡುಗ: "ಅನಾಥ ಸಾರ್!"

---

ಅವನು: "ನಾನು ಮೆಚ್ಚುವ ಮನುಷ್ಯರು ಇಬ್ಬರೇ."

ಅವಳು: (ತಿರಸ್ಕಾರದಿಂದ) "ಆ ಇನ್ನೊಬ್ಬನು ಯಾರು?"

---

ಡಾಕ್ಟರ್: "ನಿನಗೆ ರಾತ್ರಿ ಕಾಲ, ಕಿಟಕಿ ಬಾಗಿಲುಗಳನ್ನೆಲ್ಲ ತೆರೆದಿಟ್ಟು ಮಲಗಬೇಕೆಂದು ಹೇಳಿದ್ದೆನಲ್ಲ!"

ರೋಗಿ: "ಹಾಗೇ ಮಾಡಿದೆ."

ಡಾಕ್ಟರ್; "ಹಾಗಾದರೆ; ಈ ದಿನ ನಿನ್ನ ಶೀತ, ತಲೆ ಸಿಡಿತ ಎಲ್ಲಾ ಹೋಗಿರಬೇಕು."

ರೋಗಿ: "ಇಲ್ಲ, ಅದರ ಬದಲಾಗಿ, ನನ್ನ ಕೋಟು ಮತ್ತು ಪಾಕೀಟು ಹೋದುವು."

---

ಸರ್ಕಸ್ ಕಂಪೆನಿಯ ಯಜಮಾನನೊಡನೆ, ಒಬ್ಬ ಚಿಕ್ಕ—ತೆಳ್ಳಗಿನ ಮನುಷ್ಯನು, ಸಿಂಹವನ್ನು ಪಳಗಿಸುವ ಕೆಲಸ ಕೇಳ ಹೋದನು. ಅವನನ್ನು ನೋಡಿ, ಸರ್ಕಸ್ ಕಂಪೆನಿಯವನು: "ನೀನು ಚಿಕ್ಕ, ಕುಳ್ಳ, ತೆಳ್ಳಗಿನ ಮನುಷ್ಯ. ನಿನಗೆ ಈ ಕೆಲಸವೇ?" ಎಂದನು.

ಕೆಲಸಕ್ಕಾಗಿ ಬಂದವ: "ನನ್ನ ತರ್ಕ ಇಷ್ಟೇ ಸ್ವಾಮಿ, ನನ್ನಂತಹ ಚಿಕ್ಕ ಜೀವಿಯನ್ನು ತಿನ್ನಲು ಸಿಂಹಕ್ಕೆ ಹೇಗೆ ಮನಸ್ಸು ಒಪ್ಪಿತೂ ಅಂತ!"

---

ಓರ್ವ ಅಮೇರಿಕನ್, ಓರ್ವ ಆಂಗ್ಲೇಯ ಮತ್ತು ಓರ್ವ ಸ್ಕೋಚ್ ಹೀಗೆ ಮೂವರು ಒಂದು ಕಡೆ ಮಜಾ ಮಾಡುತ್ತಿದ್ದರು. ಅಮೇರಿಕನು ತನ್ನ ಶ್ರೀಮಂತಿಕೆಯ ಗಾಂಭೀರ್ಯ ತೋರಿಸಲು, ಚುಟ್ಟಾವನ್ನು ಡೊಲರ್ ಬಿಲ್‌ದಿಂದ ಉರಿಸಿದನು. ಅವನಿಗಿಂತ ತಾನು ಮೇಲು ಎಂದು ತೋರಿಸಲು ಆಂಗ್ಲೇಯನು ತನ್ನ ಚುಟ್ಟಾವನ್ನು ಪವನು ನೋಟಿನಿಂದ ಉರಿಸಿದನು. ಇನ್ನು ಉಳಿದ ಮೂರನೇಯವನಾದ ಸ್ಕೋಚನು ಏನು ಮಾಡುವನೆಂಬುದನ್ನು ಮೊದಲಿನವರಿಬ್ಬರೂ ಕುತೂಹಲದಿಂದ ನೋಡುತ್ತಿದ್ದರು. ಈ ಮಹಾರಾಯನ ತಲೆ ಇವರಿಬ್ಬರಿಗಿಂತ ಒಂದು ಪಾಲು ಮಿಗಿಲಿತ್ತು. ಅವನು ಕಿಸೆಯಿಂದ ಚೆಕ್ ಪುಸ್ತಕ ಹೊರ ತೆಗೆದು ೧೦೦ ಪವನಿನ ಒಂದು ಚೆಕ್ ಬರೆದು, ಅದರಿಂದ ತನ್ನ ಚುಟ್ಟಾ ಉರಿಸಿದನು!

---

ಓರ್ವ ಗೃಹಸ್ಥನು ತನ್ನ ದರ್ಜಿಯ ಬಳಿಗೆ ಹೋಗಿ 'ಕರೀಮ್, ನೀನು ನನಗಾಗಿ ಹೊಲಿದು ಕೊಟ್ಟ ಅಂಗಿಗಳ ಮಜೂರಿಯನ್ನು ಇನ್ನೂ ಕೇಳಲ್ಲವಲ್ಲಾ, ಏನದು?' ಎಂದು ಪ್ರಶ್ನಿಸಿದನು.

ಕರೀಮ್: "ನಾನು ಸಭ್ಯಗೃಹಸ್ಥರೊಡನೆ ಹಾಗೆ ಹಣ ಕೇಳುವುದೇ ಇಲ್ಲ ಸ್ವಾಮಿ."

ಬಂದವ: "ಸರಿ! ಒಂದು ವೇಳೆ ಅವರು ಕೊಡದೆ ಹೋದರೆ ನಿನ್ನ ಗತಿ?''

ಕರೀಮ್: "ಹಾಗೇನೂ ಹೆದರಿಕೆಯಿಲ್ಲ ಸ್ವಾಮಿ! ಅವರು ಕೊಡುವರೋ ಎಂದು ಕೆಲವು ಸಮಯನೋಡುವುದು. ಮತ್ತೂ ಕೊಡದಿದ್ದರೆ ಅವರು ಸಭ್ಯ ಗೃಹಸ್ಥರಲ್ಲವೆಂಬ ತೀರ್ಮಾನಕ್ಕೆ ಬಂದು, ಮತ್ತು ಬಾಯಿಬಿಟ್ಟು ಕೇಳುವೆನು!''

---

"ಅಹುದಯ್ಯಾ, ನಿಮ್ಮಲ್ಲಿದ್ದ ಆ ಗಿಳಿ ಏನಾಯಿತಯ್ಯಾ?''

"ನಾನು ವಿವಾಹವಾದೆ. ಅದು ವಿರಹವ್ಯಥೆಯಿಂದ ಸತ್ತಿತು."

"ಎಂದರೆ, ಮತ್ಸರದಿಂದಲೇ?''

"ಹಾಗಲ್ಲ. ಮಾತಾಡುವ ಸ್ಪರ್ಧೆ ಎದುರಿಸಲು ಅದಕ್ಕೆ ಸಾಧ್ಯವಾಗದಾಯಿತು.''

---

ಮಹಾಶಯ: ಒಂದು 'ಸೂಟಿ'ಗೆ (ಚಲ್ಲಣಕ್ಕೆ) ನನ್ನ ಮಗನು ನಿನಗೆ ಮೂರು ವರ್ಷ ಕಾಡಿಸಿರುವನಂತೆ. ನಿಜವೇ?

ದರ್ಜಿ: ಅಹುದು. ;ನೀವೇಕೆ ಬಂದಿರಿ, ಅವನು ಬಾಕಿ ಮಾಡಿದ ಹಣವನ್ನು ಕೊಡ್ಡಲಿಕ್ಕೇ?

ಮಹಾಶಯ: ಅಲ್ಲ; ನನಗೂ ಅದೇ ಶರ್ತದ ಮೇಲೆ ಒಂದು 'ಸೂಟ್' ಹೊಲಿದುಕೊಡುವಿರಾ?

---

ಡಾಕ್ಟರ್: ಆಳವಾಗಿ ಉಸಿರೆಳೆಯುವುದರಿಂದ ರೋಗಾಣುಗಳು ಸಾಯುತ್ತವೆ.

ರೋಗಿ: ಆದರೆ, ಅವುಗಳು ಆಳವಾಗಿ ಉಸಿರೆಳೆಯುವಂತೆ ನಾನು ಏನು ಮಾಡಲಿ ಸ್ವಾಮಿ?

---

ಅಜ್ಜ: (ಹಲ್ಲುನೋವಿನಿಂದ ಬಳಲುವ ಮೊಮ್ಮಗಳಿಗೆ)ನೋಡಮ್ಮಾ ಇಷ್ಟು ಸಣ್ಣ ನೋವಿಗೆ ಅಳಬಾರದು.

ಮೊಮ್ಮಗಳು: ನಿನಗದು ಸಣ್ಣದೆಂದು ತೋರುತ್ತಿದೆ! ನೀನು ಬೇಕಾದಾಗ ನಿನ್ನ ಹಲ್ಲು ತೆಗೆದಿಡುತ್ತಿ! (ಅಜ್ಜನಿಗೆ ಕೃತಕ ದಂತಗಳಿದ್ದುವು.)

---

ಶ್ರೀಮಂತ: ಬೆಳಗ್ಗಿನ ಊಟಕ್ಕೆ ಒಳ್ಳೇ ಹಸಿವೆಯಾಗಬೇಕೆಂದು ನಾನು ಪ್ರತಿದಿನ ಬೆಳಗ್ಗೆ 'ವಾಕ್' ಹೋಗುತ್ತೇನೆ.

ಭಿಕ್ಷುಕ: ನನ್ನ ಹಸಿವಿಗೆ ಊಟ ದೊರೆಯಬೇಕೆಂದು ನಾನು ಪ್ರತೀದಿನ ಬೆಳಗ್ಗೆ 'ವಾಕ್' ಹೋಗುತ್ತೇನೆ.

---

ಭಾಷಣಕಾರ: (ಸ್ನೇಹಿತನೊಡನೆ) ನೀನ್ನೆ ನನ್ನ ಭಾಷಣಕ್ಕೆ ಬಂದಿದ್ದೆಯಾ? ಹೇಗಿತ್ತು? ಭಾಷಣದ ಅಂತ್ಯ ಚೆನ್ನಾಗಿತ್ತಲ್ಲವೇ?

ಸ್ನೇಹಿತ; ಹೌದು, ಅಂತ್ಯ ಚೆನ್ನಾಗಿತ್ತು. ಆದರೆ, ಮಾಡುವುದೇನು? ಅದು ತಡವಾಗಿ ಬಂತು.

---

ಭವಿಷ್ಯ ಹೇಳುವವ: ನೋಡಿ, ನೀವು ಒಬ್ಬ ಕಪ್ಪು ಹುಡುಗಿಯನ್ನು ವಿವಾಹವಾಗುವಿರಿ, ನಿಮ್ಮ ವೈವಾಹಿಕ ಜೀವನದ ಮೊದಲ ಕೆಲವು ವರ್ಷಗಳು ಬಹಳ ಅಸಂತೋಷದಿಂದ ಕಳೆದುಹೋಗುವುವು.

ಅವನು: ಆ ಮೇಲೆ?

ಭವಿಷ್ಯ ಹೇಳುವವನು: ಆ ಮೇಲೆ ನಿಮಗೆ ಅದರ ಅಭ್ಯಾಸವಾಗುವುದು.

---

ದೂರದ ನಗರದಲ್ಲಿ, ಕೊಲೇಜಿನಲ್ಲಿ ಕಲಿಯುತ್ತಿರುವ ತಮ್ಮ ಮಗಂದಿರ ಕುರಿತು ಇಬ್ಬರು ತಂದೆಯರು ತೀವ್ರ ಚರ್ಚೆಗೆ ತೊಡಗಿದ್ದರು.

ಒಬ್ಬನಂದನು: ನನ್ನ ಮಗನಿಂದ ಬರುವ ಪತ್ರಗಳು ಯಾವಾಗಲೂ ನನ್ನನ್ನು ಅರ್ಥಕೋಶದ ಕಡೆಗೆ ಓಡಿಸುತ್ತವೆ.

ಇನ್ನೊಬ್ಬ: ಅಷ್ಟೆ ತಾನೆ? ನೀನು ಅದೃಷ್ಟಶಾಲಿ. ನನ್ನ ಮಗನ ಪತ್ರಗಳು ನನ್ನನ್ನು ಬೇಂಕಿನ ಕಡೆಗೆ ಓಡಿಸುತ್ತಿವೆ.

---

ಮನೆ ಧನಿ: ಈ ಕೋಣೆ ನಿಮಗೆ ಹೇಗೆ ಕಂಡಿತು?

ಒಕ್ಕಲು: ಭಯಂಕರ! ಇಡೀ ರಾತ್ರೆ ನನಗೆ ಕಣ್ಣು ಮುಚ್ಚಲು ಸಾಧ್ಯವಾಗಲಿಲ್ಲ.

ಧನಿ: ತೀರ ತಪ್ಪು. ಚೆನ್ನಾಗಿ ನಿದ್ದೆ ಬರಬೇಕಾದರೆ, ಕಣ್ಣುಗಳನ್ನು ಮುಚ್ಚಲೇಬೇಕೆಂಬುದು ನಿಮಗೇಕೆ ತಿಳಿಯದು?

---

ಆತ: ತೀವ್ರ ಮನಸ್ಸು ಕದಡಿಸುವ ವಿಷಯಗಳಿದ್ದರೂ ತಲೆಕೂದಲು ಕಿತ್ತುಕೊಳ್ಳದ ನನ್ನ ಸ್ನೇಹಿತನೊಬ್ಬನಿದ್ದಾನೆ.

ಈತ: ಅಷ್ಟು ಶಾಂತನೇ?

ಆತ: ಅಲ್ಲ, ಅವನ ತಲೆ ಬೋಳು.

---

ಗಿರಾಕಿ: (ಹೊಟೇಲಿನಲ್ಲಿ) ಈ ರೊಟ್ಟಿ ತಿನ್ನುವಾಗ ಸುಟ್ಟ ಚರ್ಮ ತಿಂದಹಾಗಾಗುತ್ತದೆ.

ಹೊಟೇಲ್ ಯಜಮಾನ: ವಿಚಿತ್ರ ಮನುಷ್ಯರಯ್ಯಾ ನೀವು! ನಿಮ್ಮ ಜೀವನದಲ್ಲಿ ಏನೆಲ್ಲ ವಸ್ತುಗಳ ರುಚಿ ನೋಡಿರುವಿರಿ?

---

ಪ್ರೊಫೆಸರ್: ಹದಿನೇಳನೇ ಶತಮಾನದ ಪ್ರಸಿದ್ಧ ರಸಾಯನ ಶಾಸ್ತ್ರಜ್ಞರ ಕುರಿತು ನಿನಗೇನು ತಿಳಿದಿದೆ?

ವಿದ್ಯಾರ್ಥಿ: ಅವರೆಲ್ಲರೂ ತೀರಿಹೋಗಿದ್ದಾರೆ ಸಾರ್!

---

ಕಳ್ಳ; ಸ್ವಾಮಿ, ನ್ಯಾಯಾಧೀಶರೇ, ಅಪರಾಧಕ್ಕೆ ನಿಜವಾಗಿ ನಾನು ಹೊಣೆಯಲ್ಲ. ಆಹಾರವಿಲ್ಲದೆ, ಸ್ನೇಹಿತರಿಲ್ಲದೆ, ಉಳಕೊಳ್ಳಲು ಮನೆಯಿಲ್ಲದೆ ನಾನು ನರಳುತಿದ್ದೆ.

ನ್ಯಾಯಾಧೀಶ: ಕೈದಿ, ನೀನು ನಿನ್ನ ಬಗ್ಗೆ ನನ್ನಲ್ಲಿ ಕರುಣೆ ಹುಟ್ಟಿಸಿರುವೆ. ನಿನಗೆ ಮುಂದಿನ ಒಂಭತ್ತು ತಿಂಗಳಿಗೆ ಆಹಾರ, ಸ್ನೇಹಿತರು ಮತ್ತು ಆಶ್ರಯವು ಸರಕಾರದಿಂದ ದೊರೆವುದು.

---

ಡಾಕ್ಟರ್: ನಾನು ಶಿಫಾರಸು ಮಾಡಿದ ಪಥ್ಯವನ್ನು ನೀನು ತೆಗೆದುಕೊಂಡಿಲ್ಲವೆ?

ರೋಗಿ: ತೆಗೆದುಕೊಂಡೆ ಸ್ವಾಮಿ, ಆದರೆ, ಬಲು ಕಷ್ಟವಾಯಿತು.

ಡಾಕ್ಟರ್: ಕಷ್ಟವೇನಯ್ಯಾ? ನೋಡಿ, ನಿಮ್ಮ ಮೂರು ವರ್ಷದ ಮಗನು ಏನೆಲ್ಲ ತಿನ್ನುತ್ತಾನೋ ಅಷ್ಟೇ ನೀವೂ ತಿಂದರಾಯಿತು.

ರೋಗಿ: ಅಹುದು, ನನಗೆ ಗೊತ್ತಿದೆ....ಮಯಣದ ಬತ್ತಿ, ಮಸಿ ಕೆಂಡದ ಚೂರು, ಬೂಟ್ಸಿನ ದಾರ, ರಬ್ಬರ್........

---

ಮಗು: ಅಮ್ಮಾ, ನಾವು ಆನೆ ಆಟವಾಡಬೇಕೆಂದು ನಿಶ್ಚಯಿಸಿದ್ದೇವೆ. ನೀನು ಬರಬೇಕಮ್ಮ!

ತಾಯಿ: ನಾನೇಕೆ ಮಗು?

ಮಗು: ನೀನು ಆನೆಯಾಗಬೇಕಮ್ಮ.

---

ಉಪಾಧ್ಯಾಯ: ಶಾಲೆಗೆ ಬರಲು ಏಕೆ ತಡವಾಯಿತು?

ವಿದ್ಯಾರ್ಥಿ: ಬರುವಾಗ ದಾರಿಯಲ್ಲಿ, ಒಂದು ಹಲಗೆ ನೋಡಿದೆ ಸಾರ್. ಅದರಲ್ಲಿ, "ಶಾಲೆ! ನಿಧಾನವಾಗಿ ಹೋಗಿ" (School, go slow) ಎಂದು ಬರೆದಿತ್ತು. ಅದಕ್ಕಾಗಿ, ಶಕ್ಯವಿದ್ದಷ್ಟು ನಿಧಾನವಾಗಿ ಬಂದೆ.

---

"ಬಾಯಿ ತೆರೆದುಕೊಂಡೇ ಇರುವ: ಆ ಸ್ವರ್ಣಮತ್ಸ್ಯವನ್ನು ನಿಮ್ಮ ಮೇಜಿನ ಮೇಲೆ ಬಾಟ್ಲಿಯಲ್ಲಿರಿಸಿದ್ದಿರಿ,–ಏಕೆ?"–ಆಗಂತುಕನು ಪ್ರಶ್ನಿಸಿದನು.

"ಏಕೆಂದರೆ, ಅದೊಂದು ದುರ್ಲಭ ವಸ್ತು. ಅನವರತವೂ ಬಾಯಿ ತೆರೆದುಕೊಂಡೇ ಇದ್ದರೂ, ಸಂಬಳದಲ್ಲಿ ಭಡ್ತಿ ಕೊಡಿರಿ ಎಂದು ಕೇಳದೇ ಇರೋದೆಂದರೆ ಇದೇ! ಇಂಥ ಒಂದು ಆದರ್ಶ ಹಾಗು ಮಾದರಿ ವಸ್ತು ಅತ್ಯವಶ್ಯ!"—ಎಂದನು, ಆಫೀಸಿನ ಯಾಜಮಾನ.

---

ಯುಜಮಾನ: (ಸೇವಕನಿಗೆ) ಹೊರಗೆ ಯಾರೋ ಬಂದಿರುವರು. ಟಪ್ಪಾಲು ಪೇದೆಯಾಗಿರಬಹುದು. ನೋಡು.

ಸೇವಕ: ನೋಡಲಿಕ್ಕೆಂದು ಅಡಿಗೆ ಭಟ್ಟರು ಹೋಗಿದ್ದಾರೆ.

ಯುಜಮಾನ: ಇಷ್ಟು ಹೊತ್ತೇಕೆ?

ಸೇವಕ: ಬಹುಶಃ, ಬಂದುದು ಕಾರ್ಡು ಇದ್ದಿರಬೇಕು.

---

ಪ್ರೊಫೆಸರ್: ನನ್ನ ಚಿನ್ನದ ಸಿಗರೇಟು ಪೆಟ್ಟಿಗೆ ಕಳವಾಗಿ ಹೋಯಿತು!

ಹೆಂಡತಿ: ನಿಮ್ಮ ಕಿಸೆಗೆ ಕಳ್ಳನು ಕೈಹಾಕಿದಾಗ ನಿಮಗೆ ತಿಳಿಯಲೇ ಇಲ್ಲವೇ?

ಪ್ರೊಫೆಸರ್: ತಿಳಿದಿತ್ತು. ಆದರೆ, ಅದು ನನ್ನ ಕೈಯೆಂದೇ ಎಣಿಸಿ, ಸುಮ್ಮಗಿದ್ದೆ.

---

"ನಿನ್ನೆ ರಾತ್ರಿ, ಒಂದಂಗುಲ ಅಂತರದಿಂದೆಂಬಂತೆ ಮೃತ್ಯುವಿನಿಂದ ಪಾರಾದೆ."

"ಹೇಗೆ?"

"ನಡುರಾತ್ರಿ ನನಗೆ ಎಚ್ಚರವಾದಾಗ, ನನ್ನ ಕೋಣೆಯಲ್ಲಿ ಒಂದು ಬಿಳೀ ವಸ್ತು ಕಂಡಂತಾಯಿತು. ಕೂಡಲೇ ಕೋವಿ ತೆಗೆದು, ಅದಕ್ಕೆ ಗುರಿಯಿಟ್ಟು ಹೊಡೆದೆ. ಆ ಮೇಲೆ ದೀಪವುರಿಸಿ ನೋಡುತ್ತೇನೆ,—ಅದು ನನ್ನ ಅಂಗಿಯಾಗಿತ್ತು!

"ಹಾಗಾದರೆ, ಮೃತ್ಯುವಿನ ಬಾಯಿಯಿಂದ ಪಾರಾದ ಪ್ರಶ್ನೆ ಎಲ್ಲಿ ಉಳಿಯಿತು?"

"ಅಷ್ಟೂ ತಿಳಿಯದೇ? ನಿನ್ನೆ ಮಲಗುವಾಗ ನಾನು ಅಂಗಿ ತೆಗೆದಿಡಲು ಮರೆತಿದ್ದರೆ?"

---

"ನಾಣುವಿನ ವಿಷಯ ನನಗೆ ಬಲು ಬೇಸರವಿದೆ."

"ಏಕೆ?"

"ನೀನು ಹಾಡುತ್ತಿರುವೆಯಾ? ಎಂದು ಅವನು ಕೇಳಿದನು."

"ಅದರಿಂದ ಬೇಸರವೇನು?"

"ಅವನು ಹಾಗೆ ಕೇಳುವಾಗ ನಾನು ಹಾಡುತಿದ್ದೆ."

---

ಹೋಟೇಲ್ ಯಜಮಾನ: ಕೋಣೆ ಬಾಡಿಗೆಗೆ ಬೇಕೆಂದಿರಾ? ಮೊದಲನೇ ಉಪ್ಪರಿಗೆಯಲ್ಲಿ, ದಿನಕ್ಕೆ ಮೂರು ರೂಪಾಯಿ ಬಾಡಿಗೆ; ಎರಡನೆಯದರಲ್ಲಿ ಎರಡು; ಮೂರನೆಯದರಲ್ಲಿ ಒಂದು."

ಬಂದವ: ನಮಸ್ಕಾರ. ಈ ಹೊಟೇಲು ಸಾಕಷ್ಟು ಎತ್ತರವಿಲ್ಲವೆಂದು ಕಾಣುತ್ತೆ."

---

ತುಟಿಗೆ ಗಾಯವಾದ ಸ್ಕೊಚನೊಬ್ಬನು ಆಸ್ಪತ್ರೆಗೆ ಧಾವಿಸಿದನು.

"ಮುಖಕ್ಷೌರ ಮಾಡಿಕೊಳ್ಳುವಾಗ ಗಾಯವಾಯಿತೇ? ರಕ್ತಸ್ರಾವ ನಿಲ್ಲಿಸಬೇಕೆಂದು ಬಂದಿರಾ?" ಎಂದು ಡಾಕ್ಟರನು ಕೇಳಿದನು.

"ಇಲ್ಲ, ಅದಕ್ಕಲ್ಲ. ರಕ್ತ ದಾನಕ್ಕೆ ನಿಮ್ಮಲ್ಲಿ ಯಾವ ದರ ಅಂತ ಕೇಳಲು ಬಂದೆ."—ಎಂದನು ಸ್ಕೊಚ್

---

ಫೊಟೋ ತೆಗೆಸಿದವ: ಈ ಫೊಟೋ ನನಗೆ ಎಳ್ಳಷ್ಟೂ ಪಸಂದಾಗಲಿಲ್ಲ. ನೋಡಿ, ಇದರಲ್ಲಿ ನಾನು ಕೋತಿಯ ಹಾಗೆ ಕಾಣುತಿದ್ದೇನೆ.

ಫೊಟೊಗ್ರಾಫರ್: ಅದರಲ್ಲಿ ನನ್ನದೇನು ತಪ್ಪು ಸ್ವಾಮೀ? ನೀವು

ಫೊಟೋ ತೆಗೆಸುವ ಮೊದಲೇ ಆ ವಿಷಯವನ್ನು ಖಾತರಿ ಮಾಡಿಕೊಳ್ಳ ಬೇಕಿತ್ತು.''

---

ಮಗ: ಅಪ್ಪಾ, ಒಂದಾಣೆ ಕೊಡು.

ತಂದೆ: ಆಣೆ ಕೇಳುವ ಪ್ರಾಯವು ನಿನಗೆ ದಾಟ ಹೋಯಿತಲ್ಲ ಮಗನೇ!

ಮಗ: ಸರಿ. ಹಾಗಾದರೆ ಒಂದು ರೂಪಾಯಿಯನ್ನೆ ಕೊಟ್ಟುಬಿಡು.

---

ಯಜಮಾನ: ಹೂಂ! ಹಾಗಾದರೆ, ನಿನಗೆ ಕೆಲಸಬೇಕು, ಅಲ್ಲವೇ? ನೀನು ಎಂದಾದರೂ ಸುಳ್ಳು ಹೇಳಿದುದಿದೆಯೋ?

ಕೆಲಸಕ್ಕೆ ಬಂದವ: ಇಲ್ಲ ಸ್ವಾಮೀ! ಬೇಕಾದರೆ ಬೇಗನೆ ಕಲಿಯಬಲ್ಲೆ.

---

ಆತ: ಮದರಾಸಿನಲ್ಲಿ ನಿನ್ನ ತಮಿಳು ಭಾಷೆ ಏನಾದರೂ ಅಡ್ಡಿ ಮಾಡಿತೇ?

ಈತ: ನನಗೆ ಅಡ್ಡಿ ಮಾಡಲಿಲ್ಲ; ಆದರೆ, ತಮಿಳರಿಗೆ ಅಡ್ಡಿ ಮಾಡಿತು.

---

ಡಾಕ್ಟರ್: ನೋಡಿ, ನೀವು ನಿಮ್ಮ ಅನುಪಾನದಲ್ಲಿ ಹೆಚ್ಚೆಚ್ಚು ಹಣ್ಣು ಹಂಪಲುಗಳನ್ನು ಬಳಸಿದರೆ ಲೇಸು. ಹಣ್ಣು ಹಂಪಲು ಬಳಸುವಾಗ ಮುಖ್ಯ ವಾಗಿ ಸಿಪ್ಪೆಯ ಕಡೆಗೆ ಗಮನಕೊಡಬೇಕು. ಸಿಪ್ಪೆಯಲ್ಲಿ ಎಲ್ಲ ಗುಣಗಳಿವೆ ಮತ್ತು ಜೀವಾತುಗಳಿವೆ. ಅದಿರಲಿ. ನಿಮ್ಮ ಮೆಚ್ಚಿನ ಹಣ್ಣು ಯಾವುದು?

ರೋಗಿ: (ಮ್ಲಾನವದನನಾಗಿ) ತೆಂಗಿನಕಾಯಿ.

---

ಅವನು: ನಿಮ್ಮ ಮಗನ ಕೊಲೇಜ್ ಶಿಕ್ಷಣ ಏನಾದರೂ ಒಳ್ಳೇ ಪರಿಣಾಮಮಾಡಿದೆಯೆ?

ಇವನು: ಅಹುದು, ಅವನ ಕುರಿತು ಜಂಬ ಮಾತಾಡುವ ಅವನ ತಾಯಿಯ ಆ ರೋಗ ಈಗ ಪೂರ್ಣ ಗುಣವಾಗಿದೆ.

---

ಡಾಕ್ಟರ್: ನೋಡಿ, ನಿಮ್ಮ ಗಂಡಸಿಗೆ ಪೂರ್ಣ ವಿಶ್ರಾಂತಿ ಅವಶ್ಯವಿದೆ.

ಹೆಂಡತಿ: ಇಲ್ಲ, ಅವರು ನನ್ನ ಮಾತು ಕೇಳುವುದಿಲ್ಲ.

ಡಾಕ್ಟರ್: ಅದು ಚೆನ್ನಾಯಿತು. ಒಳ್ಳೆಯ ಆರಂಭ.

---

ಆತ: ಕೈಯ ಬೆರಳಿಗೆ ಏಕೆ ದಾರ ಕಟ್ಟಿರುವೆ?

ಈತ: ಒಂದು ಪತ್ರವನ್ನು ಟಪ್ಪಾಲಿಗೆ ಹಾಕಲು ನನಗೆ ಮರೆತು ಹೋಗಬಾರದೆಂದು ನನ್ನಾಕೆ ಕಟ್ಟಿದಳು.

ಆತ: ನೀನು ಪತ್ರವನ್ನು ಟಪ್ಪಾಲಿಗೆ ಹಾಕಿದೆಯಾ?

ಈತ: ಇಲ್ಲ. ಆಕೆ ಅದನ್ನು ನನ್ನೊಡನೆ ಕೊಡಲಿಕ್ಕೆ ಮರೆತಳು.

---

ಭಾಷಣಕಾರ: ನೋಡಿ, ನನಗೆ ಭಾಷಣಕ್ಕಾಗಿ ಕೇವಲ ಹತ್ತು ನಿಮಿಷಗಳ ಅವಧಿ ಕೊಡಲ್ಪಟ್ಟಿದೆ. ಎಲ್ಲಿ ಆರಂಭಿಸುವುದೆಂದು ತಿಳಿಯೋದಿಲ್ಲ.

ಸಭಿಕರಲ್ಲೊಬ್ಬ: ಒಂಭತ್ತರಲ್ಲಿ ಆರಂಭಿಸಿರಿ.

---

ಆಕೆ: ನಿನ್ನೆ ರಾತ್ರಿ ನನ್ನ ಗಂಡನು ಕೋಪದಿಂದ, 'ನಿನ್ನನ್ನು ದೆವ್ವ ಕೊಂಡೊಯ್ಯಲಿ!' ಎಂದು ಬಯ್ದುಬಿಟ್ಟ.

ಈಕೆ: ನೀನೇನು ಮಾಡಿದೆ?

ಆಕೆ: ಅಮ್ಮನಿಗೆ ಹೇಳಿ ಕಳಿಸಿದೆ. ಅವಳು ಈಗ ಬಂದು ನನ್ನನ್ನು ಕರೆದೊಯ್ಯುತ್ತಾಳೆ.

---

ಕೆನಡಕ್ಕೆ ಹೊಸತಾಗಿ ಬಂದು ನೆಲಸಿದ ಓರ್ವ ಆಂಗ್ಲೇಯನು, ಪಶ್ಚಿಮ ಮೂಲೆಯ ಒಂದು ಪಟ್ಟಣದಲ್ಲಿ ಒಂದು ಅಂಗಡಿ ತೆರೆದು 'ಗಲ೩೬ರಲ್ಲಿ ಸ್ಥಾಪಿತವಾದದ್ದು' ಎಂದು ಬೋರ್ಡು ತೂಗಿಸಿದನು.

ಎದುರಲ್ಲೆ ಇನ್ನೋರ್ವನು ಬಂದು, ವ್ಯಾಪಾರದಲ್ಲಿ ಪ್ರತಿಸ್ಪರ್ಧೆ ಹೂಡಿದನು. 'ನಿನ್ನೆ ಸ್ಥಾಪಿತವಾದುದು. ಹಳೇ ಸಾಮಾನೊಂದೂ ಶಿಲ್ಕಿನಲ್ಲಿರುವುದಿಲ್ಲ. ಎಲ್ಲವೂ ಹೊಸತು.'

---

ಸ್ನೇಹಿತ: ನಿನ್ನ ಆದಾಯವನ್ನು ನೀನು ಹೇಗೆ ಖರ್ಚು ಮಾಡುತ್ತಿ?

ಉತ್ತರ: ಸೇಕಡಾ ೩೦ರಷ್ಟು ಆಶ್ರಯಕ್ಕಾಗಿ, ೩೦ರಷ್ಟು ಬಟ್ಟೆಗಾಗಿ, ೪೦ರಷ್ಟು ಆಹಾರಕ್ಕಾಗಿ, ೨೦ರಷ್ಟು ಮತ್ತೆ ಕೆಲವು ವಿಲಾಸಗಳಿಗಾಗಿ.''

ಸ್ನೇಹಿತ: ನೀನು ಹೇಳಿದ ಲೆಕ್ಕದಲ್ಲಿ, ಸೇಕಡಾ ೧೨೦ ಆಯಿತಲ್ಲ!

ಉತ್ತರ: ನನ್ನ ಆಯವ್ಯಯದ ಮುಖ್ಯ ಗುಟ್ಟು ಅಲ್ಲಿದೆ.

# To make a long Story



# SHORT

ಸುದೀರ್ಘ ಗೋಷ್ಟಿಯನ್ನು ಸಂಕ್ಷಿಪ್ತಗೊಳಿಸುವುದಾದರೆ —.

—ಅಹುದು. ನಿಮ್ಮ ಮಗುವು ಹಣವುಳಿಸುವಂತೆ, ಉಳಿಸಿದಷ್ಟನ್ನು ಸೇವಿಂಗ್ಸ್ ಬೇಂಕ್ ಖಾತೆಯಲ್ಲಿ ಠೇವಣಿಯಿರಿಸುವಂತೆ, ಆ ಮಗುವಿಗೆ ಕಲಿಸಬಲ್ಲಿರಾದರೆ, ನಿಮ್ಮ ಮಗುವನ್ನು ನೀವು ಊಹಿಸಿದ್ದಕ್ಕಿಂತಲೂ ಅಲ್ಪಾವಧಿಯಲ್ಲಿ ಸಾರ್ಥಕ್ಯಕ್ಕೂ ಸೌಭಾಗ್ಯ ಸಂತೋಷಗಳಿಗೂ ಕರೆದೊಯ್ಯಬಲ್ಲಿರಿ.

ಚಲಾವಣೆ ಬಂಡವಾಲ ರೂ. 6,50,00,000.

ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬೇಂಕಿಂಗ್ ಸಿಂಡಿಕೇಟ್, ಲಿ.

## THE CANARA INDUSTRIAL & BANKING SYNDICATE Ltd

ESTD. 1925

H.O. UDIPI (S.I.)　　HOMJI St. BOMBAY

Edited, Printed and Published by K. V. Shenoy
at The Prabhat Printers, Ltd., Mangalore-1.